## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 936 |
| ಸದಸ್ಯರ ಹೆಸರು | : | ಶ್ರೀ ಟಿ.ಎ. ಶರವಣ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 12-03-2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಮಹಾನಗರಕ್ಕೆ ಸರಬರಾಜು ಆಗುತ್ತಿರುವ ಕುಡಿಯುವ ನೀರಿನ ಗುಣಮಟ್ಟವನ್ನು ಪರೀಕ್ಷೆ ಮಾಡಿಸಲಾಗುತ್ತಿದೆಯೇ; ಹಾಗಿದ್ದಲ್ಲಿ, ಇತ್ತೀಚೆಗೆ ಗುಣಮಟ್ಟ ಪರೀಕ್ಷೆಯನ್ನು; ಯಾವಾಗ ಮಾಡಿಸಲಾಗಿದೆ. | ಬೆಂಗಳೂರು ಜಲಮಂಡಳಿಯು ಬೆಂಗಳೂರು ನಾಗರಿಕರಿಗೆ ಕಾವೇರಿ ನೀರನ್ನು ಸರಬರಾಜು ಮಾಡುತ್ತಿದ್ದು, ತನ್ನದೇ ಎರಡು ಉತ್ತಮವಾದ ಪ್ರಯೋಗಾಲಯಗಳನ್ನು ಹೊಂದಿದ್ದು ಪ್ರತಿ ನಿತ್ಯ ನೀರನ್ನು ನಿರಂತರವಾಗಿ ಪರೀಕ್ಷೆಗೆ ಒಳಪಡಿಸಿ ಅದರ ಫಲಿತಾಂಶವನ್ನು ಬೆಂಗಳೂರು ಜಲಮಂಡಳಿಯ ಅಂತರ್ಜಾಲದಲ್ಲಿ ಪ್ರಕಟಿಸಲಾಗುತ್ತಿದೆ. ಬೆಂಗಳೂರು ಜಲಮಂಡಳಿಯ ಪ್ರಯೋಗಾಲಯದ ಜೊತೆಗೆ ಹೆಚ್ಚುವರಿಯಾಗಿ NABL ಮಾನ್ಯತೆ ಹೊಂದಿರುವ ಇತರೆ ಹೊರಗಿನ ಖಾಸಗಿ ಪ್ರಯೋಗಾಲಯದಲ್ಲಿ ಗ್ರಾಹಕರ ಹಾಗೂ ಬೆಂಗಳೂರು ಜಲಮಂಡಳಿಯ ಹಿತದೃಷ್ಟಿಯಿಂದ ನೀರಿನ ಮಾದರಿಯ ಗುಣಮಟ್ಟವನ್ನು ಅಳೆಯಲು ಪ್ರತಿ ಮೂರು ತಿಂಗಳಿಗೊಮ್ಮೆ ಪರೀಕ್ಷಿಸಲಾಗುತ್ತಿದೆ ಹಾಗೂ ಇತ್ತೀಚೆಗೆ ಜನವರಿ 2020 ಮಾಹೆಯಲ್ಲಿ NABL ಮಾನ್ಯತೆ ಹೊಂದಿರುವ ಮೆ॥ ಎಸ್.ಎಲ್.ಎನ್ ಟೆಸ್ಟಿಂಗ್ ಲ್ಯಾಬೊರೇಟರಿ ಪ್ರಯೋಗಾಲಯದಲ್ಲಿ ನೀರಿನ ಗುಣಮಟ್ಟವನ್ನು ಪರೀಕ್ಷಿಸಲಾಗಿದೆ. |
| ಆ | ಕುಡಿಯುವ ನೀರಿನ ಗುಣಮಟ್ಟವನ್ನು ಸದ್ಯ ಪರೀಕ್ಷೆ ಮಾಡುತ್ತಿರುವ ಸಂಸ್ಥೆಯ ಹೆಸರೇನು; ಮತ್ತು ಅದು ನಿಗಧಿತ ಮಾನದಂಡವನ್ನು ಹೊಂದಿದೆಯೇ; | ಬೆಂಗಳೂರು ಜಲಮಂಡಳಿಯಿಂದ ಸರಬರಾಜು ಮಾಡುತ್ತಿರುವ ನೀರನ್ನು ಮಂಡಳಿಯ ಎರಡು ಪ್ರಯೋಗಾಯಗಳಲ್ಲಿ: ಜಯನಗರ ಹಾಗೂ ಹೈಗ್ರೌಂಡ್ಸ್‌ನಲ್ಲಿ ಪರೀಕ್ಷೆ ಮಾಡಲಾಗುತ್ತಿದೆ ಮತ್ತು ಪ್ರತೀ ಮೂರು ತಿಂಗಳಿಗೊಮ್ಮೆ ವಿವಿಧ NABL ಮಾನದಂಡ ಪಡೆದಿರುವ ಪ್ರಯೋಗಾಲಯದಿಂದಲೂ ನೀರಿನ ಮಾದರಿಗಳನ್ನು ಪರೀಕ್ಷೆ ಮಾಡಿಸಲಾಗುತ್ತಿದೆ.<br>1. ಮೆ॥ ಎಸ್.ಎಲ್.ಎನ್ ಟೆಸ್ಟಿಂಗ್ ಲ್ಯಾಬೊರೇಟರಿ.,<br>2. ಮೆ॥ ರಾಮಯ್ಯ ಅಡ್ವಾನ್ಸ್ಡ್ ಟೆಸ್ಟಿಂಗ್ ಲ್ಯಾಬ್., ರವರಿಂದ ಇತ್ತೀಚೆಗೆ ಕುಡಿಯುವ ನೀರಿನ ಗುಣಮಟ್ಟವನ್ನು ಪರೀಕ್ಷೆ ಮಾಡಿಸಲಾಗಿದೆ. |
| ಇ | ಶುದ್ಧ ಕುಡಿಯುವ ನೀರು ಎಂದು ಹೇಳಲು ಇರಬೇಕಾದಂತಹ ಅತ್ಯಾವಶ್ಯಕವಾದ ಮಾನದಂಡಗಳಾವುವು; ಅವು ಬೆಂಗಳೂರಿಗೆ ಸರಬರಾಜು ಆಗುತ್ತಿರುವ ನೀರಿನಲ್ಲಿ ನಿಗಧಿತ ಮಟ್ಟದಲ್ಲಿ ಇವೆಯೇ; | ಶುದ್ಧ ಕುಡಿಯುವ ನೀರು ಎಂದು ಹೇಳಲು ಇರಬೇಕಾದಂತಹ ಅತ್ಯಾವಶ್ಯಕವಾದ ಮಾನದಂಡಗಳು (Parameters) ಈ ಕೆಳಗಿನಂತಿವೆ: (ಕೆಳಗಿನ ಕೋಷ್ಟಕ ನೋಡಿ)<br>ಬೆಂಗಳೂರು ಜಲಮಂಡಳಿಯಿಂದ ಸರಬರಾಜು ಮಾಡುತ್ತಿರುವ ನೀರಿನಲ್ಲಿ ನಿಗದಿತ ಮಟ್ಟದಲ್ಲಿ ಮಾನದಂಡಗಳು ಇವೆ. |

| ಕ್ರ ಸಂ. | ಕುಡಿಯುವ ನೀರು ಎಂದು ಹೇಳಲು ಇರಬೇಕಾದಂತಹ ಅತ್ಯಾವಶ್ಯಕವಾದ ಮಾನದಂಡಗಳು | BIS IS 10500:2012 ಕುಡಿಯುವ ನೀರಿನ ನಿರ್ಧಿಷ್ಟತೆಗೆ ಅನುಗುಣವಾದ ಮಿತಿ |
|---|---|---|
| 01 | ಉಳಿಕೆ ಕ್ಲೋರಿನ್ ಅಂಶ | 0.2 to 1.0 ppm |
| 02 | pH | 6.5 to 8.5 |
| 03 | ಪ್ರಕ್ಷುಬ್ಧತೆ. | 1.0 to 5.0 NTU |
| 04 | ನೀರಿನಲ್ಲಿ ಒಟ್ಟು ಕರಗಿದ ಘನ ವಸ್ತುಗಳು | 500 to 2000 mg/l |
| 05 | ಸೂಕ್ಷ್ಮಾಣು ಜೀವಿಗಳು | Should not be detectable in 100ml sample. |

...2

<table>
<tr>
<td>ಈ</td>
<td>ಈ ಹಿಂದೆ ಪರೀಕ್ಷೆಗೊಳಪಡಿಸಲು ಬೆಂಗಳೂರಿನ ಯಾವ ಯಾವ ಭಾಗಗಳಿಂದ ನೀರಿನ ಮಾದರಿಯನ್ನು ಪಡೆಯಲಾಗಿತ್ತು; ಮತ್ತು ಅವುಗಳ ವರದಿಯನ್ನು ನೀಡುವುದು;</td>
<td>ಬೆಂಗಳೂರು ನೀರು ಸರಬರಾಜು ಮಂಡಳಿಯಿಂದ ಸರಬರಾಜು ಮಾಡಲಾಗುತ್ತಿರುವ ಎಲ್ಲಾ 31 ಉಪ-ವಿಭಾಗದ ವ್ಯಾಪ್ತಿಯಲ್ಲೂ (198 ವಾರ್ಡ್‌ಗಳಲ್ಲಿ) ನೀರಿನ ಮಾದರಿಗಳನ್ನು ಸಂಗ್ರಹಿಸಿ ಪ್ರಯೋಗಾಲಯದಲ್ಲಿ ಪರೀಕ್ಷೆ ಮಾಡಲಾಗುತ್ತಿದ್ದು, ಈ ಹಿಂದಿನ ಐದು ವರ್ಷಗಳಲ್ಲಿ ವಾರ್ಷಿಕ ನೀರಿನ ಮಾದರಿಗಳ ಗುಣಮಟ್ಟವು ಈ ಕೆಳಕಂಡಂತಿದೆ:
<table>
<tr><th>Sl. No.</th><th>Years (Jan to Dec)</th><th>Total samples</th><th>NSPP samples</th><th>% of NSPP samples</th></tr>
<tr><td>1</td><td>2015</td><td>23776</td><td>394</td><td>1.66</td></tr>
<tr><td>2</td><td>2016</td><td>27147</td><td>218</td><td>0.80</td></tr>
<tr><td>3</td><td>2017</td><td>29138</td><td>387</td><td>1.33</td></tr>
<tr><td>4</td><td>2018</td><td>30034</td><td>282</td><td>0.94</td></tr>
<tr><td>5</td><td>2019</td><td>30016</td><td>344</td><td>1.15</td></tr>
<tr><td>6</td><td>2020 (upto 29th February)</td><td>4599</td><td>20</td><td>0.43</td></tr>
</table>
ಗ್ರಾಹಕರಿಗೆ ಕುಡಿಯಲು ಯೋಗ್ಯವಾದ ನೀರನ್ನು ವಿಶ್ವ ಆರೋಗ್ಯ ಸಂಸ್ಥೆಯು ಅನುಮತಿಸಿದ ಪ್ರಮಾಣ ಶೇಕಡ 5 ರಷ್ಟಿದ್ದು, ಬೆಂಗಳೂರು ಜಲಮಂಡಳಿಯ ನೀರಿನ ಫಲಿತಾಂಶದ ಪ್ರಮಾಣವು ಶೇಕಡ 5 ಕ್ಕಿಂತ ಕಡಿಮೆ ಇದ್ದು ನಿಗದಿತ ಪರಿಮಿತಿಯಲ್ಲಿರುತ್ತದೆ.</td>
</tr>
<tr>
<td>ಉ</td>
<td>ಬೆಂಗಳೂರು ಮಹಾನಗರಕ್ಕೆ ಕುಡಿಯಲು ಪೂರೈಕೆಯಾಗುತ್ತಿರುವ ನೀರು ವಿಷಪ್ರಾಶನವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅದರ ನಿವಾರಣೆಗೆ ತೆಗೆದುಕೊಂಡ ಕ್ರಮಗಳ ಮಾಹಿತಿ ನೀಡುವುದು?</td>
<td>ಬೆಂಗಳೂರು ಜಲಮಂಡಳಿಯಿಂದ ಮಹಾನಗರಕ್ಕೆ ಕುಡಿಯಲು ಪೂರೈಕೆಯಾಗುತ್ತಿರುವ ನೀರಿನಲ್ಲಿ ವಿಷಪ್ರಾಶನವಾಗುತ್ತಿರುವ ಬಗ್ಗೆ ಯಾವುದೇ ದೂರುಗಳು ಬಂದಿರುವುದಿಲ್ಲ.</td>
</tr>
</table>

ಸಂಖ್ಯೆ: ನಅಇ 24 ಎಂಎನ್‌ಐ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.